# ಕರ್ನಾಟಕ ವಿಧಾನ ಪರಿಷತ್ತು

1 ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 22
2 ಸದಸ್ಯರ ಹೆಸರು : ಶ್ರೀ ಯು.ಬಿ.ವೆಂಕಟೇಶ್
(ನಾಮ ನಿರ್ದೇಶನ ಹೊಂದಿದವರು)
3 ಉತ್ತರಿಸುವ ದಿನಾಂಕ : 17-09-2021
4 ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರಿನ ಹನುಮಂತ ನಗರದಲ್ಲಿರುವ ರಾಜೀವ್‌ಗಾಂಧಿ ಕ್ರೀಡಾಂಗಣಕ್ಕೆ ಮೂಲ ಸೌಕರ್ಯಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ | ಪ್ರಸಕ್ತ ಸಾಲಿನಲ್ಲಿ ಬೆಂಗಳೂರು ನಗರದ ಕ್ರೀಡಾಂಗಣಗಳ ಅಭಿವೃದ್ಧಿಗೆ ಮೀಸಲಿರಿಸಿರುವ ಅನುದಾನವೆಷ್ಟು; ಸದರಿ ರಾಜೀವ್‌ಗಾಂಧಿ ಕ್ರೀಡಾಂಗಣದ ಅಭಿವೃದ್ಧಿಗೆ ಸರ್ಕಾರ ಕಾರ್ಯ ಯೋಜನೆಯನ್ನು ಸಿದ್ಧಪಡಿಸಿದೆಯೇ; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಬರುವ ಬಸವನಗುಡಿ ವಿಭಾಗದ ರಾಜೀವ್‌ಗಾಂಧಿ ಕ್ರೀಡಾಂಗಣದ ಅಭಿವೃದ್ಧಿಗ ಒಟ್ಟು ರೂ.800.00 ಲಕ್ಷಗಳ ಅನುದಾನವನ್ನು "ಮುಖ್ಯಮಂತ್ರಿಗಳ ನವ ನಗರೋತ್ಥಾನ" ಯೋಜನೆಯಡಿಯಲ್ಲಿ ಅನುವು ಮಾಡಲಾಗಿರುತ್ತದೆ. ಸದರಿ ಅನುದಾನದಲ್ಲಿ (ಅ) ಒಳಾಂಗಣ ಕ್ರೀಡಾಂಗಣಕ್ಕೆ ಮತ್ತು ಕಟ್ಟಡಕ್ಕೆ ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ಹೆಚ್ಚಿಸಲು ಪ್ಯಾಕೇಜ್-2ರಲ್ಲಿ ರೂ.300.00 ಲಕ್ಷಗಳಿಗೆ ಅಂದಾಜು ಪಟ್ಟಿಯನ್ನು ತಯಾರಿಸಿದ್ದು, ಸರ್ಕಾರದ ಆದೇಶ ಸಂಖ್ಯೆ: ನಅಇ 26 ಎಂಎನ್‌ವೈ 2021, ದಿನಾಂಕ: 01.03.2021ರಂದು ಸದರಿ ಕಾಮಗಾರಿಯ ಪ್ಯಾಕೇಜ್-2 ಗೆ ಆಡಳಿತಾತ್ಮಕ ಅನುಮೋದನೆ ಮತ್ತು ಕನಿಷ್ಠ ದರ ನಮೂದಿಸಿದ ಗುತ್ತಿಗೆದಾರರಾದ ಶ್ರೀ ಪೋಲಾವರ ಗೋಪಾಲಕೃಷ್ಣ ರವರ ಟೆಂಡರ್‌ಗೆ ಸರ್ಕಾರದ ಅನುಮೋದನೆ ನೀಡಲಾಗಿದೆ. ಅದರಂತೆ, ದಿನಾಂಕ: 19-05-2021ರಂದು ಬಿಬಿಎಂಪಿ ವತಿಯಿಂದ ಕಾರ್ಯಾದೇಶ ನೀಡಲಾಗಿರುತ್ತದೆ.<br><br>ಪ್ರಸ್ತುತ, ಸದರಿ ಕಾಮಗಾರಿಯು ಪ್ರಗತಿಯಲ್ಲಿದ್ದು ಶೇ.20 ರಷ್ಟು ಪ್ರಗತಿ ಸಾಧಿಸಲಾಗಿದೆ ಹಾಗೂ ಸದರಿ ಕಾಮಗಾರಿಯನ್ನು ಏಪ್ರಿಲ್ 2022 ರಲ್ಲಿ ಅನುಷ್ಠಾನಗೊಳಿಸಲಾಗುತ್ತದೆ.<br><br>(ಆ) ಹೊರಾಂಗಣ ಕ್ರೀಡಾಂಗಣಕ್ಕೆ ಸಂಬಂಧಿಸಿದಂತೆ ಪ್ಯಾಕೇಜ್-4 ರಲ್ಲಿ ರೂ.500.00 ಲಕ್ಷಗಳಿಗೆ ಅಂದಾಜು ಪಟ್ಟಿಯನ್ನು ತಯಾರಿಸಿದ್ದು, ಸರ್ಕಾರದ ಆದೇಶ ಸಂಖ್ಯೆ: ನಅಇ 21 ಎಂಎನ್‌ವೈ 2021, ದಿನಾಂಕ: 26.02.2021ರಂದು ಸದರಿ ಕಾಮಗಾರಿಯ ಪ್ಯಾಕೇಜ್-4 ಗೆ ಆಡಳಿತಾತ್ಮಕ ಅನುಮೋದನೆ ಮತ್ತು ಕನಿಷ್ಠ ದರ ನಮೂದಿಸಿದ ಗುತ್ತಿಗೆದಾರರಾದ ಶ್ರೀ ವಿ. ಪ್ರಶಾಂತ್ ಶೆಟ್ಟಿ (ಶ್ರೀ ಭುವನೇಶ್ವರಿ ಕನ್ಸ್ಟ್ರಕ್ಷನ್ಸ್) ರವರ ಟೆಂಡರ್‌ಗೆ ಸರ್ಕಾರದ ಅನುಮೋದನೆ ನೀಡಲಾಗಿದೆ. ಅದರಂತೆ, ದಿನಾಂಕ: 19-03-2021 ರಂದು ಬಿಬಿಎಂಪಿ ವತಿಯಿಂದ ಕಾರ್ಯಾದೇಶ ನೀಡಲಾಗಿರುತ್ತದೆ. |

...2.

| | | |
|---|---|---|
| ಇ | ಸಿದ್ಧಪಡಿಸಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಯೋಜನೆಯನ್ನು ಪ್ರಾರಂಭಿಸಲಾಗುವುದು? | ಪ್ರಸ್ತುತ, ಸದರಿ ಕಾಮಗಾರಿಯು ಪ್ರಗತಿಯಲ್ಲಿದ್ದು, ಮಾರ್ಚ್ 2022 ರಲ್ಲಿ ಸದರಿ ಹೊರಾಂಗಣ ಕ್ರೀಡಾಂಗಣ ಕಾಮಗಾರಿಯನ್ನು ಅನುಷ್ಠಾನಗೊಳಿಸಲಾಗುತ್ತದೆ. |

**ಸಂಖ್ಯೆ: ನಅಇ 235 ಎಂಎನ್‌ವೈ 2021 (ಇ)**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ